# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 215 |
| 2 | ಸದಸ್ಯರ ಹೆಸರು | : | ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | : | 19-07-2019 |
| 4 | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನಿರ್ದೇಶಕರಿಗೆ ಇರಬೇಕಾದ ವಿದ್ಯಾರ್ಹತೆ ಏನು; ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ನಿರ್ದೇಶಕರು ಹೊಂದಿರುವ ವಿದ್ಯಾರ್ಹತೆ ಏನು; | ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿರುವ ನಿರ್ದೇಶಕರು ಹುದ್ದೆಯನ್ನು ಭರ್ತಿ ಮಾಡುವ ವಿಧಾನ<br><br>**1) ಮುಂಬಡ್ತಿಯಿಂದ**<br>ಜಂಟಿ ನಿರ್ದೇಶಕರ ಹುದ್ದೆಯಿಂದ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಲು ವಿಜ್ಞಾನ ವಿಷಯದಲ್ಲಿ ಡಾಕ್ಟರೇಟ್ ಪದವಿ ಹೊಂದಿರಬೇಕು ಹಾಗೂ 5 ವರ್ಷ ಸೇವೆಯನ್ನು ಜಂಟಿ ನಿರ್ದೇಶಕರ ಹುದ್ದೆಯಲ್ಲಿ ಪೂರ್ಣಗೊಳಿಸಿರಬೇಕು.<br><br>**2) ನಿಯೋಜನೆ**<br>ವೃಂದ ಮತ್ತು ನೇಮಕಾತಿ ನಿಯಮದಲ್ಲಿ ಅವಕಾಶ ಕಲ್ಪಿಸಲಾಗಿರುವಂತೆ, ಕರ್ನಾಟಕ ರಾಜ್ಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಐ.ಪಿ.ಎಸ್. ಅಧಿಕಾರಿಗಳ ನಿಯೋಜನೆಯಿಂದ ಭರ್ತಿ ಮಾಡಬಹುದಾಗಿರುತ್ತದೆ.<br><br>**3) ನೇರ ನೇಮಕಾತಿಯಿಂದ**<br>1) ವಿಜ್ಞಾನ ವಿಷಯದಲ್ಲಿ ಡಾಕ್ಟರೇಟ್ ಪದವಿ ಹೊಂದಿರಬೇಕು.<br>2) 20 ವರ್ಷ ಅನುಭವವನ್ನು ಹಿರಿಯ ಹುದ್ದೆಗಳಲ್ಲಿ ಯಾವುದಾದರೊಂದು ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಹೊಂದಿರಬೇಕು.<br><br>ಪ್ರಸ್ತುತ ಹೆಚ್ಚುವರಿ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನಿರ್ದೇಶಕರ ವಿದ್ಯಾರ್ಹತೆ ಬಿ.ಟೆಕ್ (ಐ.ಐ.ಟಿ ಮದ್ರಾಸ್, ಎಲೆಕ್ಟ್ರಿಕಲ್) |
| (ಆ) | ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸೈಬರ್ ವಿಭಾಗದ ವರದಿ ನೀಡುವ ದಾಖಲೆಗಳಿಗೆ ಸಹಿ ಮಾಡಲು ಅರ್ಹರಿರುವ ಅಧಿಕಾರಿಗಳು ಯಾವ ಪದವಿಯನ್ನು ಹೊಂದಿರುತ್ತಾರೆ; | ಪ್ರಸ್ತುತ ಸೈಬರ್ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಹಾಯಕ ನಿರ್ದೇಶಕರು ಎಂ.ಎಸ್.ಸಿ (ಐ.ಟಿ) ಸ್ನಾತಕೋತ್ತರ ಪದವಿಯನ್ನು ಹೊಂದಿರುತ್ತಾರೆ. |

| | | |
|---|---|---|
| (ಇ) | ಅರ್ಹ ವಿದ್ಯಾಭ್ಯಾಸ ಪಡೆಯದೆ ಕೇವಲ 3 ತಿಂಗಳ ತರಬೇತಿ ಪಡೆದಿರುವ ಯಾವುದೇ ವ್ಯಕ್ತಿಯು ಸೈಬರ್ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸಲು ಅರ್ಹರೆ; ಹಾಗಿದಲ್ಲಿ, ನೇಮಕ ಪ್ರಕ್ರಿಯೆ ಸಂದರ್ಭದಲ್ಲಿ ಅರ್ಹ ವಿದ್ಯಾಭ್ಯಾಸದ ಕುರಿತು ಮಾಹಿತಿ ಪಡೆಯುವ ಅವಶ್ಯಕತೆ ಇದೆಯೇ; ಯಾವುದೇ ಅರ್ಹತೆ ಇಲ್ಲದ ವ್ಯಕ್ತಿಯನ್ನು ನೇಮಕ ಮಾಡಿ ಆ ಬಳಿಕ 3 ತಿಂಗಳ ತರಬೇತಿ ನೀಡಿದಲ್ಲಿ, ಎಮ್.ಎಸ್ಸಿ. ಕಂಪ್ಯೂಟರ್ ಸೈನ್ಸ್ ಪದವಿಗೆ ಸರಿಸಮ ಎಂದಂತಾಗಲಿಲ್ಲವೇ; ಈ ಕುರಿತು ಸರ್ಕಾರದ ನಿಲುವೇನು; | ಸೈಬರ್ ವಿಭಾಗದಲ್ಲಿ ಓ.ಓ.ಡಿ ಆಧಾರದ ಮೇಲೆ ಪ್ರಸ್ತುತ 1 ಸಹಾಯಕ ನಿರ್ದೇಶಕರು, ಹಾಗೂ 5 ವೈಜ್ಞಾನಿಕ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದು, ವಿವಿಧ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಂತಹ ವೈಜ್ಞಾನಿಕ ಅಧಿಕಾರಿಗಳನ್ನು ಆಂತರಿಕ ಸಂದರ್ಶನದ ಮೂಲಕ ಆಯ್ಕೆ ಮಾಡಿದ್ದು, ಜೀವಶಾಸ್ತ್ರ ವಿಭಾಗದಿಂದ-1, ಭೌತಶಾಸ್ತ್ರ ವಿಭಾಗದಿಂದ-1, ಫೋಟೋಗ್ರಫಿ ವಿಭಾಗದಿಂದ-3 ಸಿಬ್ಬಂದಿಯನ್ನು ಆಯ್ಕೆ ಮಾಡಿ, 3 ತಿಂಗಳ ಸಿ-ಡ್ಯಾಕ್ ತರಬೇತಿಗಾಗಿ ಕೇಳರಕ್ಕೆ ನಿಯೋಜಿಸಿ, ತರಬೇತಿಯಿಂದ ಹಿಂದುರುಗಿದ ನಂತರ ಸಿಬ್ಬಂದಿಗಳನ್ನು ಸೈಬರ್ ವಿಭಾಗಕ್ಕೆ ನಿಯೋಜಿಸಲಾಗಿರುತ್ತದೆ. ಪ್ರಸ್ತುತ ಸೈಬರ್ ವಿಭಾಗದಲ್ಲಿ ಓ.ಓ.ಡಿ ಆಧಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ವೈಜ್ಞಾನಿಕ ಅಧಿಕಾರಿಗಳಲ್ಲಿ 1 ಸಿಬ್ಬಂದಿ ಸಮಾನಾಂತರ ವಿದ್ಯಾಭ್ಯಾಸ ಹೊಂದಿರುತ್ತಾರೆ, 4 ವೈಜ್ಞಾನಿಕ ಅಧಿಕಾರಿಗಳು ಸೈಬರ್ ವಿಭಾಗಕ್ಕೆ ಅಗತ್ಯವಿರುವ ಎಂ.ಎಸ್.ಸಿ ಕಂಪ್ಯೂಟರ್ ಸೈನ್ ವಿದ್ಯಾಭ್ಯಾಸವನ್ನು ಹೊಂದಿದ್ದು, 2 ಸಿಬ್ಬಂದಿಗಳು ಈಗಾಗಲೇ ಎಂ.ಎಸ್.ಸಿ ಕಂಪ್ಯೂಟರ್ ಸೈನ್ಸ್ ವಿದ್ಯಾಭ್ಯಾಸ ಪೂರ್ಣಗೊಳಿಸಿದ್ದು, ಉಳಿದ 2 ಸಿಬ್ಬಂದಿಗಳು ವಿದ್ಯಾಭ್ಯಾಸವನ್ನು ಪೂರ್ಣಗೊಳಿಸುವ ಹಂತದಲ್ಲಿರುತ್ತಾರೆ. |
| (ಈ) | ಸಿಬ್ಬಂದಿಗಳ ಕೊರತೆಯ ನೆಪವೊಡ್ಡಿ ಅನರ್ಹರನ್ನು ಸೈಬರ್ ವಿಭಾಗಕ್ಕೆ ನೇಮಕ ಮಾಡಿ 3 ತಿಂಗಳ ತರಬೇತಿ ನೀಡಲಾಗಿದೆ ಎಂದರೆ ಸೈಬರ್ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವವರು ನೇಮಕಾತಿ ಸಂದರ್ಭದಲ್ಲಿ ಅರ್ಹ ವಿದ್ಯಾಭ್ಯಾಸ ಹೊಂದಿಲ್ಲ ಎಂಬುದನ್ನು ಒಪ್ಪಿಕೊಂಡಂತಾಗಿದ್ದು ಈ ರೀತಿಯಾಗಿ ಅನರ್ಹರನ್ನು ನೇಮಕ ಮಾಡಿದವರ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ? | ಆಡಳಿತಾತ್ಮಕ ಹಿತದೃಷ್ಟಿಯಿಂದ ಸೈಬರ್ ವಿಭಾಗಕ್ಕೆ ಇತರೇ ವಿಭಾಗದಿಂದ ನಿದೇಶಕರು ವೈಜ್ಞಾನಿಕ ಅಧಿಕಾರಿಗಳನ್ನು ಆಂತರಿಕ ಸಂದರ್ಶನದ ಮುಖಾಂತರ ಆಯ್ಕೆ ಮಾಡಿ, ಸಿ-ಡ್ಯಾಕ್ ತರಬೇತಿಗಾಗಿ ಕೇರಳಕ್ಕೆ ಕಳುಹಿಸಿದ್ದು, ತರಬೇತಿಯ ನಂತರ ಸೈಬರ್ ವಿಭಾಗದಲ್ಲಿ ವಿಶ್ಲೇಷಣಾ ಕಾರ್ಯ ನಡೆಸುತ್ತಿರುತ್ತಾರೆ, ಪ್ರಕರಣಗಳಿಗೆ ಸಹಿಯನ್ನು ವಿಭಾಗದ ಮುಖ್ಯಸ್ಥರು ಮಾಡುತ್ತಿದ್ದು, ಅನರ್ಹರನ್ನು ಸೈಬರ್ ವಿಭಾಗಕ್ಕೆ ನೇಮಕ ಮಾಡಿರುವುದಿಲ್ಲ. |

**ಸಂಖ್ಯೆ: ಒಇ 59 ಪಿಇಐ 2019**

**(ಎಂ.ಬಿ. ಪಾಟೀಲ)**
ಗೃಹ ಸಚಿವರು